# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 402 |
| 2 | ಸದಸ್ಯರ ಹೆಸರು | ಶ್ರೀ ನಸೀರ್ ಅಹ್ಮದ್<br>(ವಿಧಾನಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸಬೇಕಾದ ದಿನಾಂಕ | 15.12.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಐದು ವರ್ಷಗಳಿಂದ ಭೂಮಾಪಕರಿಗೆ ಸಂಬಂಧಪಟ್ಟಂತೆ ಅಳತೆ ವಿಚಾರದಲ್ಲಿ ತತ್ಕಾಲ್ ಪೋಡಿ, 11ಇ ನಕ್ಷೆ ಮತ್ತು ಅಲಿನೇಷನ್ ನಕ್ಷೆ ಇವುಗಳ ಸಂಬಂಧ ಸೇವಾ ಶುಲ್ಕ ವಿತರಣೆಯಾಗದಿರಲು ಕಾರಣವೇನು; | ಕಳೆದ ಐದು ವರ್ಷಗಳಿಂದ ತತ್ಕಾಲ್ ಪೋಡಿ, 11ಇ ನಕ್ಷೆ ಮತ್ತು ಅಲಿನೇಷನ್ ಪ್ರಕರಣಗಳಲ್ಲಿ ಅಳತೆ ಬಾಬ್ತು ಪರವಾನಗಿ ಭೂಮಾಪಕರಿಗೆ ಒಟ್ಟು ರೂ 481,04,40,783.00/ ಗಳ ಸೇವಾ ಶುಲ್ಕ ಸಂದಾಯ ಮಾಡಲಾಗಿದೆ. |
| ಆ) | ಕಳೆದ ಐದು ವರ್ಷಗಳಿಂದ ತತ್ಕಾಲ್ ಪೋಡಿ ವಿಚಾರದಲ್ಲಿ ರೈತರು ಇಲಾಖಾ ಆಯುಕ್ತರ ಪಿ.ಡಿ. ಖಾತೆಗೆ ಸಂದಾಯಿಸಿರುವ ಹಣ ಎಷ್ಟು; ಹಾಗೂ ಇಲಾಖಾ ಆಯುಕ್ತರ ಪಿ.ಡಿ. ಖಾತೆಯ ಬದಲು ಇಲಾಖೆಯ ಖಾತೆಗೆ ನೇರವಾಗಿ ಸಂದಾಯಿಸಿಕೊಳ್ಳಲು ಸರ್ಕಾರಕ್ಕೆ ಇರುವ ತೊಂದರೆಗಳೇನು; ಇದನ್ನು ಯಾವ ಕಾಲಮಿತಿಯಲ್ಲಿ ಸರಿಪಡಿಸಲಾಗುವುದು; | ಕಳೆದ ಐದು ವರ್ಷಗಳಲ್ಲಿ ತತ್ಕಾಲ್ ಪೋಡಿ ವಿಚಾರದಲ್ಲಿ ರೈತರು ಜಮಾ ಮಾಡಿರುವ ಒಟ್ಟು ಹಣ 313,36,07,805.00. ಜಮೆಯಾದ ಹಣದಿಂದ 11ಇ, ಅಲಿನೇಷನ್ ನಕ್ಷೆ, ತತ್ಕಾಲ್ ಪೋಡಿ, ಇ-ಸ್ವತ್ತು, ಹದ್ದುಬಸ್ತು ಇತ್ಯಾದಿ ಅಳತೆ ಕೆಲಸ ನಿರ್ವಹಿಸಿರುವ ಬಾಬ್ತು ಪರವಾನಗಿ ಭೂಮಾಪಕರುಗಳಿಗೆ ಸಂಭಾವನೆ ಪಾವತಿಸಲಾಗುತ್ತಿತ್ತು. ಸರ್ಕಾರದ ನಡವಳಿ ಸಂ. ಕಂಇ 29 ಎಜಿಸ್ 2021 ದಿನಾಂಕ 28-9-2021 ರನ್ವಯ ಮೋಜಿಣಿ ಯೋಜನೆಯಡಿ ಸ್ವೀಕರಿಸಲಾದ ಹಣವನ್ನು ಬ್ಯಾಂಕ್ ಖಾತೆಗೆ ಜಮಾ ಮಾಡದೆ, ನೇರವಾಗಿ ಸರ್ಕಾರದ ರಾಜಸ್ವ ಲೆಕ್ಕ ಶೀರ್ಷಿಕೆಗೆ ಜಮಾ ಮಾಡಲು ಸೂಚಿಸಿದ್ದು ಅದರಂತೆ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ಇದೇ ಪೋಡಿ ತತ್ಕಾಲ್ ವಿಚಾರದಲ್ಲಿ ಅಳತೆ ಕೆಲಸ ಮಾಡಲು ವಿಳಂಬವಾದಲ್ಲಿ ರೈತರು ಆಯುಕ್ತರ ಪಿ.ಡಿ. ಖಾತೆಗೆ ಸಂದಾಯಿಸಿರುವ ಹಣದ ಜೊತೆ ದಂಡವನ್ನು ಸೇರಿಸಿ ರೈತರಿಗೆ ವಾಪಸ್ಸು ನೀಡಬೇಕೆಂಬ ಕಾನೂನು ಜಾರಿಗೆ ತಂದಿದ್ದರೂ ಸಹ ಇದುವರೆಗೂ ರೈತರಿಗೆ ಯಾಕೆ ಹಣವನ್ನು ನೀಡಿರುವುದಿಲ್ಲ; ನೀಡಿ ದ್ದಲ್ಲಿ, ರೈತರ ಸಂಪೂರ್ಣ ಮಾಹಿತಿಯನ್ನು ನೀಡುವುದು? | ತತ್ಕಾಲ್ ಪೋಡಿ ಪ್ರಕರಣಗಳಲ್ಲಿ ಈವರೆವಿಗೂ ಪರವಾನಗಿ ಭೂಮಾಪಕರುಗಳು 30 ದಿನಗಳ ಒಳಗೆ ಇತ್ಯರ್ಥಪಡಿಸಿದ ಪ್ರಕರಣಗಳಿಗೆ ಮಾತ್ರ ಸೇವಾ ಶುಲ್ಕ ಪಾವತಿಸಲಾಗುತ್ತಿದೆ. ವಿಳಂಬವಾದ ಪ್ರಕರಣಗಳಿಗೆ ಪರವಾನಗಿ ಭೂಮಾಪಕರಿಗೆ ಸೇವಾ ಶುಲ್ಕ ಪಾವತಿಸಿರುವುದಿಲ್ಲ. ಹಾಗೂ ಈ ರೀತಿ ವಿಳಂಬವಾದ ಪ್ರಕರಣಗಳಲ್ಲಿ ರೈತರು ಸಂದಾಯಿಸಿರುವ ಹಣದ ಜೊತೆ ದಂಡವನ್ನು ಸೇರಿಸಿ ರೈತರಿಗೆ ವಾಪಸ್ಸು ನೀಡಿರುವುದಿಲ್ಲ. ಆದರೆ ಅನಿವಾರ್ಯ ಕಾರಣಗಳಿಂದ 30 ದಿನಗಳ ನಂತರವೂ ಸಹ ತತ್ಕಾಲ್ ಪೋಡಿ ನಿರ್ವಹಿಸಿದ ಪ್ರಕರಣಗಳಲ್ಲಿಯೂ ಸಹ ಸೇವಾ ಶುಲ್ಕ ಪಾವತಿಸುವಂತೆ ಪರವಾನಗಿ ಭೂಮಾಪಕರುಗಳು ಸತತವಾಗಿ ಹಲವಾರು ಬಾರಿ ಬೇಡಿಕೆಗಳನ್ನಿಟ್ಟು, ಮುಷ್ಕರ ಸಹ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ 30 ದಿನಗಳು ಮೀರಿದ ಪ್ರಕರಣಗಳಲ್ಲಿ ಸೇವಾ ಶುಲ್ಕವನ್ನು ಪರವಾನಗಿ ಭೂಮಾಪಕರಿಗೆ ಪಾವತಿಸಲು ಸರ್ಕಾರದಲ್ಲಿ ಪ್ರಸ್ತಾವನೆ ಸ್ವೀಕೃತವಾಗಿದ್ದು, ಪರಿಶೀಲನೆಯಲ್ಲಿದೆ. |

**ಸಂಖ್ಯೆ: ಕಂಇ 200 ಎಸ್ಎಸ್ಸಿ 2021**

**(ಆರ್.ಅಶೋಕ)**

ಕಂದಾಯ ಸಚಿವರು